# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಆರ್. ಪ್ರಸನ್ನಕುಮಾರ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1950

ಉತ್ತರಿಸಬೇಕಾದ ದಿನಾಂಕ : 23.03.2021

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರೈತರು ಸಹಕಾರ ಸಂಘಗಳಿಂದ ಪಡೆದ ಸಾಲವನ್ನು ರಾಜ್ಯ ಸರ್ಕಾರ ಇತ್ತೀಚೆಗೆ ಮನ್ನಾ ಮಾಡಿದೆಯೇ; | ಹೌದು. |
| ಆ) | ರೈತರ ಸಾಲಮನ್ನಾ ಮಾಡಲು ಇರುವ ಯೋಜನೆಯ ಮಾನದಂಡಗಳೇನು; | ಸಹಕಾರ ಸಂಘಗಳ ರೂ.1.00 ಲಕ್ಷಗಳ ಸಾಲಮನ್ನಾ ಯೋಜನೆಯಲ್ಲಿನ ಮಾನದಂಡಗಳು ಈ ಕೆಳಕಂಡಂತಿರುತ್ತವೆ.<br>1. ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು, ಡಿಸಿಸಿ ಬ್ಯಾಂಕುಗಳು, ಪಿಕಾರ್ಡ್ ಬ್ಯಾಂಕುಗಳು ಹಾಗೂ ಲ್ಯಾಂಪ್ಸ್‌ಗಳಲ್ಲಿ ರೈತರು ದಿ:10.07.2018ಕ್ಕೆ ಬೆಳೆ ಸಾಲ ಹೊರಬಾಕಿ ಹೊಂದಿರಬೇಕು.<br>2. ಬೆಳೆ ಸಾಲದಲ್ಲಿ ಒಂದು ಕುಟುಂಬಕ್ಕೆ ಗರಿಷ್ಠ ರೂ.1.00 ಲಕ್ಷದವರೆವಿಗೆ ಸಾಲಮನ್ನಾ ಆಗುತ್ತದೆ.<br>3. ಈ ಯೋಜನೆ ಕೆಳಕಂಡವರಿಗೆ ಅನ್ವಯವಾಗುವುದಿಲ್ಲ.<br>• ರೂ.20,000/-ಗಳ ಹೆಚ್ಚಿನ ವೇತನ/ಪಿಂಚಣಿ ಪಡೆಯುವ ಸರ್ಕಾರಿ, ಸಹಕಾರ ಮತ್ತು ಇತರೇ ಕ್ಷೇತ್ರದ ನೌಕರರು<br>• ಕಳೆದ ಮೂರು ವರ್ಷಗಳಲ್ಲಿ ಯಾವುದಾದರೂ ಒಂದು ವರ್ಷದಲ್ಲಿ ಆದಾಯ ತೆರಿಗೆ ಪಾವತಿಸಿರಬೇಕು.<br>4. ದಿ:10.07.2018 ಕ್ಕೆ ಹೊರಬಾಕಿ ಚಾಲ್ತಿ ಇದ್ದಲ್ಲಿ, ರೂ.1.00 ಲಕ್ಷಕ್ಕಿಂತ ಹೆಚ್ಚಿನ ಅಸಲನ್ನು ಗಡುವಿನ ದಿನಾಂಕದೊಳಗೆ ಮರುಪಾವತಿಸತಕ್ಕದ್ದು.<br>5. ಬೆಳೆ ಸಾಲದ ಹೊರಬಾಕಿ ಸುಸ್ತಿ ಇದ್ದಲ್ಲಿ ಮರುಪಾವತಿ ದಿನಾಂಕದವರೆಗಿನ ಸಂಪೂರ್ಣ ಬಡ್ಡಿಯನ್ನು ಹಾಗೂ ರೂ.1.00 ಲಕ್ಷಕ್ಕಿಂತ ಹೆಚ್ಚಿನ ಅಸಲನ್ನು ದಿನಾಂಕ:31.07.2019ರೊಳಗೆ ಪಾವತಿಸತಕ್ಕದ್ದು.<br>6. ಎರಡು ಸಹಕಾರ ಸಂಘಗಳಲ್ಲಿ ಸಾಲ ಪಡೆದಿದ್ದಲ್ಲಿ ಒಂದು ಸಹಕಾರ ಸಂಘದಲ್ಲಿ ಮಾತ್ರ ಸಾಲ ಮನ್ನಾ ದೊರೆಯುವುದು. |

| | | |
|---|---|---|
| ಇ | ಯಾವ ಯಾವ ಸಹಕಾರಿ ಸಂಘ ಹಾಗೂ ಬ್ಯಾಂಕ್‌ಗಳಿಂದ ಪಡೆದ ಸಾಲವನ್ನು ಮನ್ನಾ ಮಾಡಲಾಗಿದೆ; | ರೈತರು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು, ಡಿಸಿಸಿ ಬ್ಯಾಂಕುಗಳು, ಪಿಕಾರ್ಡ್ ಬ್ಯಾಂಕುಗಳು ಹಾಗೂ ಲ್ಯಾಂಪ್ಸ್ ಸೊಸೈಟಿಗಳಲ್ಲಿ ಪಡೆದ ಬೆಳೆ ಸಾಲವನ್ನು ಮನ್ನಾ ಮಾಡಲಾಗಿದೆ. |
| ಈ | ಸದರಿ ಯೋಜನೆಯ ಫಲಾನುಭವಿಗಳ ಒಟ್ಟು ಸಂಖ್ಯೆ ಎಷ್ಟು ಹಾಗೂ ಸಾಲಮನ್ನಾ ಮಾಡಲಾಗಿರುವ ಮೊತ್ತ ಎಷ್ಟು? | ಸದರಿ ಯೋಜನೆಯಲ್ಲಿ ಇದುವರೆಗೆ 17,06,048 ಫಲಾನುಭವಿಗಳಿಗೆ ರೂ.7987.47 ಕೋಟಿಗಳ ಬೆಳೆ ಸಾಲ ಮನ್ನಾ ಮಾಡಿ ಅನುದಾನ ಬಿಡುಗಡೆ ಮಾಡಲಾಗಿದೆ. |

**ಸಂಖ್ಯೆ: ಸಿಒ 103 ಸಿಎಲ್‌ಎಸ್ 2021**

(ಎಸ್.ಟಿ. ಸೋಮಶೇಖರ್)

**ಸಹಕಾರ ಸಚಿವರು**